ತಾರಾದೇವಿಯುವರನ್ನು ಕರೆದುಕೊಂಡು ಹೊರಟಿದ್ದನು. ಅವನು ಗಡೀಪಾರು ಹೊಂದಬೇಕೆಂದಿದ್ದರೂ ನೀಚನಾದ ರಾಮಶರಣನು ಅವನ ಮೇಲಿನ ಕುನಸನ್ನು ತ್ಯಜಿಸಿರಲಿಲ್ಲ. ಅವನು ಗಂಗಾತೀರದಲ್ಲಿ ಅಜಯನನ್ನು ಕೂಡಿ, ಅವನ ಮೇಲೆ ಗುಂಡು ಒಗೆದನು. ಕರ್ಮಧರ್ಮಸಂಯೋಗದಿಂದ ಅದು ಅವನಿಗೆ ತಗಲಲಿಲ್ಲ. ಅಷ್ಟರಲ್ಲಿ ಲೀಲಾವತಿಯು ಅವನನ್ನು ಕೈತುಬಾಕಿಯಿಂದ ಹೊಡೆದು ಕೊಂದಳು!

ಅಜಯಸಿಂಹನು ನೇಪಾಳದೇಶಕ್ಕೆ ಹೊರಟ ಸಂಗತಿಯನ್ನು ಲೀಲಾವತಿಯು ಗುಪ್ತಚರರ ಮುಖಾಂತರ ತಿಳಿದು, ಅವನ ದರ್ಶನಕ್ಕಾಗಿ ಹೊರಟಿದ್ದಳು. ಗಂಗಾತಟಾಕದಲ್ಲಿ ಅವನು ಭೆಟ್ಟಿಯಾದನು. ರಾಮಶರಣನು ಅಜಯಸಿಂಹನ ಮೇಲೆ ತುಬಾಕಿಯು ಗುರಿಯಿಟ್ಟದ್ದನ್ನು ನೋಡಿ, ಅವನನ್ನು ತನ್ನ ತುಬಾಕಿಯಿಂದ ಹೊಡೆದು ಕೊಂದಳು! ನೀಚ ಜನರಿಗೆ ದುರ್ಮರಣದ ಹೊರತು ಮತ್ತಾವ ಲಾಭವು ದೊರೆಯುವದು?

ಲೀಲಾವತಿಯ ದರ್ಶನದಿಂದ ರಾಣಿಗೂ ತಾರಾದೇವಿಗೂ ಅಜಯಸಿಂಹ ನಿಗೂ ಒಹಳೇ ಆನಂದವಾಯಿತು. ತನುಗೊದಗಿದ ಆಪತ್ತನ್ನು ತಿಳಿಸಿ, ಅಜಯ ಸಿಂಹನು ಕಣ್ಣುತುಂಬ ನೀರು ತಂದನು. ದೇಶತ್ಯಾಗ ಮಾಡುವ ಪ್ರಸಂಗ ವೊದಗಿದ ಮೇಲೆ ಯಾರಿಗೆ ದುಃಖವೆನಿಸಲಿಕ್ಕಿಲ್ಲ? ಅಷ್ಟರಲ್ಲಿ ಫುಲಶಾಹನೂ ಕೊಳಲಸ್ವಾಮಿಯೂ ಅಲ್ಲಿಗೆ ಒಂದು ಅವನಿಗೆ ಹಿತೋಪದೇಶ ಮಾಡಿದರು.

ರಾಬರ್ಟಸಾಹೇಬನು ಆಂಗ್ಲ ಮುಖ್ಯಾಧಿಕಾರಿಯಾದ ಲಾರ್ಡ ಕ್ಯಾನಿಂಗನ ಬಳಿಗೆ ಹೋಗಿ ನಿಮ್ಮ ಗುಣವರ್ಣನೆ ಮಾಡಿರುವನೆಂದೂ, ನಿಮ್ಮ ಜಹಾಗೀ ರಿಯು ನಿಮಗೆ ದೊರೆಯುವ ಬಗ್ಗೆ ಅವನು ಪ್ರಯತ್ನ ನಡೆಯಿಸಿರುವನೆಂದೂ ಲೀಲಾವತಿಯು ಅಜಯಸಿಂಹನಿಗೆ ಹೇಳಿದಳು. ಜಹಾಗೀರಿಯು ವ್ಯವಸ್ಥೆಯಾಗುವ ವರೆಗೆ ನೇಪಾಳದಲ್ಲಿರಬೇಕೆಂದು ಪುಲಶಾಹನೂ ಕೊಳಲಸ್ವಾಮಿಯೂ ಹೇಳಿದರು.

ಲೀಲಾವತಿಯು ರಾಣಿ-ತಾರಾದೇವಿಯರನ್ನೂ ಅಜಯಸಿಂಹನನ್ನೂ ಅಗಲಿ ಇರುವದಕ್ಕೆ ಮನಸ್ಸಿಲ್ಲದವಳಾಗಿದ್ದಳು. ಅವರಾದರೂ ಆ ಆಂಗ್ಲಯುವತಿಯ ವಿಷಯದಲ್ಲಿ ನಿರ್ವ್ಯಾಜ ಪ್ರೇಮವುಳ್ಳವರಾಗಿದ್ದರು. ಅಜಯ ಸಿಂಹನು ಲೀಲಾ ವತಿಯನ್ನು ಅವಳ ಇಚ್ಛೆಯ ಮೇರೆಗೆ ತನ್ನೊಡನೆ ಕರೆದುಕೊಂಡು ನೇಪಾಳಕ್ಕೆ ಹೋಗುವದಕ್ಕಾಗಿ ಗಂಗಾನದಿಯನ್ನು ದಾಟಿದನು.

ಭಾರತದ ಈ ಸ್ವಾತಂತ್ರ್ಯದ ರಣಕುಂಡದಲ್ಲಿ ಕುವರಸಿಂಹರಂತಹ ಎಷ್ಟೋ ನರರತ್ನಗಳು 'ಆತ್ಮಬಲಿ'ದಾನ ಮಾಡಿದರೂ ಕಡೆಗೆ ಅಪಯಶವೇ ಪ್ರಾಪ್ತವಾಯಿತು! ಇದೇನು ದೈವದುರ್ವಿಲಾಸವೊ ಗ್ರಹಲೀಲೆಯೊ?

ಸಂಪೂರ್ಣ